

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1211(1392) |
| ಮಾನ್ಯ ಸದಸ್ಯರ ಹೆಸರು | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 23/09/2021 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ಸಮಯದಲ್ಲಿ ಕಾರ್ಮಿಕ ಇಲಾಖೆಯಿಂದ ಕಾರ್ಮಿಕರಿಗೆ ಹಾಗೂ ದಿನಗೂಲಿ ನೌಕರರಿಗೆ ಯಾವ ಯೋಜನೆಗಳಲ್ಲಿ, ಯಾವ ಪ್ರಮಾಣದಲ್ಲಿ ನೆರವು ನೀಡಲಾಯಿತು; (ಪ್ರತ್ಯೇಕವಾಗಿ ಪೂರ್ಣ ವಿವರಗಳೊಡನೆ) | **1. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br><br>ರಾಜ್ಯ ಸರ್ಕಾರವು ಕೋವಿಡ್-19ರಿಂದ ಸಂಕಷ್ಟಕ್ಕೊಳಗಾದ ಅಸಂಘಟಿತ ಕಾರ್ಮಿಕರ ಹಿತದೃಷ್ಟಿಯಿಂದ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ನೀಡಲಾದ ಸೌಲಭ್ಯಗಳ ವಿವರ ಕೆಳಕಂಡಂತಿದೆ.<br><br>➢ ಕೋವಿಡ್-19ರ 2020ನೇ ವರ್ಷದ ಮೊದಲನೇ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಅಗಸ ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 1,41,602 ಅಸಂಘಟಿತ ಕಾರ್ಮಿಕರಿಂದ ಒಂದು ಬಾರಿ ರೂ.5,000/-ಗಳ ನೆರವನ್ನು ಕೋರಿ ಅರ್ಜಿ ಸ್ವೀಕರಿಸಲಾಗಿದ್ದು, ಈವರೆಗೆ 1,19,462 ಕಾರ್ಮಿಕರಿಗೆ ಒಟ್ಟು ರೂ.59.82 ಕೋಟಿಗಳ ಪರಿಹಾರವನ್ನು ನೀಡಲಾಗಿದೆ. ಜಿಲ್ಲಾವಾರು ವಿವರ **<u>ಅನುಬಂಧ -01ರಲ್ಲಿ</u>** ಲಗತ್ತಿಸಿದೆ.<br>➢ ಕೋವಿಡ್-19ರ 2021ನೇ ವರ್ಷದ ಎರಡನೇ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಗೃಹಕಾರ್ಮಿಕರು, ಟೈಲರ್‌ಗಳು, ಮೆಕ್ಯಾನಿಕ್, ಚಿಂದಿ ಆಯುವವರು, ಹಮಾಲರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕರ ವೃತ್ತಿ ನಿರ್ವಹಿಸುತ್ತಿರುವ 18,23,445 ಕಾರ್ಮಿಕರು ರೂ.2,000/-ಗಳ ನೆರವನ್ನು ಕೋರಿ ಅರ್ಜಿಯನ್ನು ಸಲ್ಲಿಸಿದ್ದು, 2,14,731 ಕಾರ್ಮಿಕರಿಗೆ ತಲಾ ರೂ.2,000/-ಗಳಂತೆ ಒಟ್ಟು ರೂ.42.95 ಕೋಟಿಗಳ ನೆರವನ್ನು ಪಾವತಿಸಲಾಗಿದೆ. ಇನ್ನುಳಿದ ಕಾರ್ಮಿಕರಿಗೆ ನೆರವಿನ ಮೊತ್ತವನ್ನು ಪಾವತಿಸಲು ಅಗತ್ಯ ಕ್ರಮ ವಹಿಸಲಾಗಿದೆ. ಜಿಲ್ಲಾವಾರು ವಿವರ **<u>ಅನುಬಂಧ -02ರಲ್ಲಿ</u>** ಲಗತ್ತಿಸಿದೆ. |

2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-

ಈ ವತಿಯಿಂದ ರಾಜ್ಯದಲ್ಲಿರುವ ಸಂಕಷ್ಟಕ್ಕೆ ಒಳಗಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಕೋವಿಡ್-19ರ ಮೊದಲನೇ ಅಲೆ ಮತ್ತು 2ನೇ ಅಲೆಯ ಹಿನ್ನೆಲೆಯಲ್ಲಿ ಈ ಕೆಳಕಂಡ ಕ್ರಮ ಕೈಗೊಳ್ಳಲಾಗಿದೆ.:

<u>ಮೊದಲನೇ ಅಲೆ:-</u>

1. 16,48,431 ಫಲಾನುಭವಿಗಳಿಗೆ ತಲಾ ರೂ. 5,000/- ಗಳಂತೆ ಒಟ್ಟುರೂ. 824.21 ಕೋಟಿ ಸಹಾಯಧನವನ್ನು ನೇರ ನಗದು ವರ್ಗಾವಣೆ (DBT) ಮೂಲಕ ನೀಡಲಾಗಿದೆ.
2. ರೂ. 53.94 ಕೋಟಿ ಮೊತ್ತದಲ್ಲಿ 7.15 ಲಕ್ಷ ಆಹಾರ ಸಾಮಾಗ್ರಿಗಳ ಕಿಟ್ (Dry Ration Kit) ಗಳನ್ನು ವಿತರಿಸಲಾಗಿದೆ.
3. ರೂ.26.71 ಕೋಟಿ ಮೊತ್ತದಲ್ಲಿ ಪ್ರತಿದಿನ ಎರಡು ಬಾರಿಯಂತೆ ಒಟ್ಟು 89.87 ಲಕ್ಷ ಸಿದ್ಧಪಡಿಸಿದ ಆಹಾರದ ಪ್ಯಾಕೆಟ್‌ಗಳನ್ನು ವಿತರಿಸಲಾಗಿದೆ ಹಾಗೂ ವಸತಿ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ.
4. 4.41 ಲಕ್ಷಕ್ಕೂ ಹೆಚ್ಚು ವಲಸೆ ಕಟ್ಟಡ ಕಾರ್ಮಿಕರನ್ನು ತಮ್ಮ ರಾಜ್ಯಗಳಿಗೆ ವಿಶೇಷ ಶ್ರಮಿಕ ರೈಲುಗಳ ಮೂಲಕ ಹಾಗೂ 25,000 ಕ್ಕೂ ಹೆಚ್ಚು ಕಾರ್ಮಿಕರನ್ನು ಬಸ್‌ಗಳ ಮೂಲಕ ಕಳುಹಿಸಲು ಅಗತ್ಯಕ್ರಮ ಹಾಗೂ ಸಿದ್ಧಪಡಿಸಿದ ಆಹಾರ ಪೊಟ್ಟಣಗಳ ವಿತರಣೆ.
5. ಇದಕ್ಕಾಗಿ ಕಾರ್ಮಿಕ ಸಂಘಟನೆಗಳು, ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರದೊಂದಿಗೆ ಕೈಜೋಡಿಸಿರುತ್ತಾರೆ.

<u>ಕೋವಿಡ್ ಎರಡನೇ ಅಲೆ:-</u>

1. ತಲಾ ರೂ.3,000/- ಗಳಂತೆ ಸುಮಾರು 18.20 ಲಕ್ಷ ಕಾರ್ಮಿಕರಿಗೆ ಒಟ್ಟು ರೂ.546.21 ಕೋಟಿ ಮೊತ್ತವನ್ನು ಫಲಾನುಭವಿಗಳ ಬ್ಯಾಂಕ್ ಖಾತೆಗೆ ನೇರ ನಗದು ವರ್ಗಾವಣೆ(DBT) ಮೂಲಕ ಜಮಾ ಮಾಡಲಾಗಿದೆ. ಉಳಿದ ಫಲಾನುಭವಿಗಳಿಗೆ ಬ್ಯಾಂಕ್ ಖಾತೆಗೆ ರೂ. 3,000/- ಗಳನ್ನು ಜಮಾ ಮಾಡಲು ಕ್ರಮ ವಹಿಸಲಾಗುತ್ತಿದೆ.
2. ಮಂಡಳಿಯ ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಆಹಾರ ಸಮಸ್ಯೆಯನ್ನು ನೀಗಿಸಲು ರೂ. 23.20 ಕೋಟಿ ವೆಚ್ಚದಲ್ಲಿ ರಾಜ್ಯಾದ್ಯಂತ 23.42 ಲಕ್ಷ ಕಾರ್ಮಿಕರಿಗೆ ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ವಿತರಿಸಲಾಗಿದೆ.

| | | |
|---|---|---|
| | | 3. ನೋಂದಾಯಿತ ಅರ್ಹ 20.20 ಲಕ್ಷ ಕಾರ್ಮಿಕರಿಗೆ ಸುರಕ್ಷತಾ ಮತ್ತು ನೈರ್ಮಲ್ಯ ಕಿಟ್‌ಗಳನ್ನು ವಿತರಿಸಲಾಗುತ್ತಿದೆ.<br>4. ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸಲು 24*7 ಕಾರ್ಮಿಕ ಸಹಾಯವಾಣಿ 155214 ಅನ್ನು ಸ್ಥಾಪಿಸಲಾಗಿದೆ.<br>5. ಕೋವಿಡ್-19 ವೈರಸ್ ಹರಡುವಿಕೆಯನ್ನು ನಿಯಂತ್ರಿಸಲು, ಕಾರ್ಮಿಕರು ವಾಸಿಸುತ್ತಿರುವ 40 ಕಾರ್ಮಿಕ ಕಾಲೋನಿಗಳನ್ನು ಸ್ಯಾನಿಟೈಸೇಷನ್ ಮತ್ತು ಫ್ಯೂಮಿಗೇಷನ್ ಮಾಡಲಾಗಿರುತ್ತದೆ.<br>6. ಕೋವಿಡ್-19ನಿಂದಾಗಿ ನೋಂದಾಯಿತ ಫಲಾನುಭವಿಯು ಮರಣ ಹೊಂದಿದಲ್ಲಿ ಅವರ ಅವಲಂಬಿತರಿಗೆ ರೂ.2.00 ಲಕ್ಷ ಪರಿಹಾರಧನ ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>7. ಕೋವಿಡ್ ಸೋಂಕಿನಿಂದಾಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಲ್ಲಿ ನೋಂದಾಯಿತ ಕಟ್ಟಡ ಕಾರ್ಮಿಕರು ಮತ್ತು ಅವರ ಅವಲಂಬಿ ತರಿಗೆ ವೈದ್ಯಕೀಯ ವೆಚ್ಚ ಮರುಪಾವತಿ ಪಡೆಯಲು ಅವಕಾಶ ಕಲ್ಪಿಸಲಾಗಿರುತ್ತದೆ.<br>8. ಕಾರ್ಮಿಕರು ಕೋವಿಡ್ ಸೋಂಕು ಪೀಡಿತರಾಗಿ ಕೆಲಸಕ್ಕೆ ಗೈರು ಹಾಜರಾದ ದಿನಗಳಿಗೆ ಉಂಟಾದ ವೇತನ ನಷ್ಟಕ್ಕೆ ರೂ.10,000/- ರವರೆಗೆ ಪರಿಹಾರವನ್ನು ಒದಗಿಸಲು ಅವಕಾಶ ಕಲ್ಪಿಸಲಾಗಿದೆ.<br>ಮಂಡಳಿಯ ವತಿಯಿಂದ ರೂಪಿಸಿರುವ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳ ಸಹಾಯಧನದ ಮೊತ್ತವನ್ನು ಕಾರ್ಮಿಕರ ಕಲ್ಯಾಣಕ್ಕಾಗಿ ಸುಮಾರು ಶೇ. 50 ರಿಂದ 60 ರಷ್ಟು ಹೆಚ್ಚಿಸಿ ಪರಿಷ್ಕರಿಸಲಾಗಿದೆ.<br>ಮಂಡಳಿಯ ವತಿಯಿಂದ ವಿವಿಧ ಐ.ಇ.ಸಿ ಚಟುವಟಿಕೆಗಳನ್ನು ಕೈಗೊಳ್ಳುವ ಮೂಲಕ ಕಾರ್ಮಿಕರಲ್ಲಿ ಕೋವಿಡ್-19ರ ಕುರಿತಂತೆ ಜಾಗೃತಿ ಮೂಡಿಸಲಾಗಿರುತ್ತದೆ.<br>**3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**<br>ಕೋವಿಡ್-19ರ ಸಂದರ್ಭದಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ವತಿಯಿಂದ ಸಂಘಟಿತ ಕಾರ್ಮಿಕರಿಗೆ ನೆರವು ನೀಡಿರುವುದಿಲ್ಲ. |
| ಆ) | ಕಳೆದ ಸಾಲಿನಲ್ಲಿ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನ ಸಕಾಲದಲ್ಲಿ ನೀಡಲಾಗಿದೆಯೇ; | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ** ಮಂಡಳಿಯ ಮೂಲಕ **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"**ಯಡಿ ಅರ್ಹ ಫಲಾನುಭವಿಗಳಾಗಿ ಪರಿಗಣಿಸಿದ ಕಾರ್ಮಿಕರು ಅಪಘಾತದಿಂದ ನಿಧನರಾದಲ್ಲಿ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದಲ್ಲಿ, ಅವರ ಇಬ್ಬರು ಮಕ್ಕಳಿಗೆ 1ನೇ |

| | | |
|---|---|---|
| | | ತರಗತಿಯಿಂದ ಪದವಿ ಪೂರ್ವ ವ್ಯಾಸಂಗದವರೆಗೆ ವಾರ್ಷಿಕ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದ್ದು, ಕಳೆದ ಸಾಲಿನಲ್ಲಿ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನ ಸಕಾಲದಲ್ಲಿ ನೀಡಲಾಗಿದೆ.<br><br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಕಟ್ಟಡ ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ಸಕಾಲದಲ್ಲಿ ನೀಡಲು ಕ್ರಮಕೈಗೊಳ್ಳಲಾಗಿದೆ.<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ 20:40 ರ ಅನುಪಾತದಲ್ಲಿ ವಂತಿಗೆ ಪಾವತಿಸುವ ಸಂಘಟಿತ ಕಾರ್ಮಿಕರ ಮಕ್ಕಳಿಗೆ 2020-21ನೇ ಸಾಲಿಗೆ 13,729 ವಿದ್ಯಾರ್ಥಿಗಳಿಗೆ ರೂ. 6,01,48,000/-ಗಳ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಸೌಲಭ್ಯ ನೀಡಲಾಗಿರುತ್ತದೆ. |
| ಇ) | ಪ್ರತಿ ವಿದ್ಯಾರ್ಥಿಗೆ ಎಷ್ಟು ಮೊತ್ತದ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ; (ವಿವರಗಳೊಡನೆ) | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ** ಕಳೆದ ಸಾಲಿನಲ್ಲಿ 191 ವಿದ್ಯಾರ್ಥಿಗಳಿಗೆ ತಲಾ ರೂ. 10,000/-ಗಳಂತೆ 19,10,000/-ಗಳ ವಿದ್ಯಾರ್ಥಿ ವೇತನವನ್ನು ನೀಡಲಾಗಿದೆ.<br><br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ** ಪ್ರತಿ ವಿದ್ಯಾರ್ಥಿಗೆ ನೀಡಲಾಗುತ್ತಿರುವ ವಿದ್ಯಾರ್ಥಿ ವೇತನದ ವಿವರವನ್ನು **ಅನುಬಂಧ-3ರಲ್ಲಿ** ಲಗತ್ತಿಸಿದೆ.<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ವತಿಯಿಂದ** ಕಾರ್ಮಿಕ ಕಲ್ಯಾಣ ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಕಾರ್ಖಾನೆಗಳು/ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರ ಮಕ್ಕಳಿಗೆ, ಹಿಂದಿನ ವರ್ಷದ ತರಗತಿಯಲ್ಲಿ ಸಾಮಾನ್ಯ ವರ್ಗದವರಿಗೆ ಶೇ.50 ರಷ್ಟು, ಪ. ಜಾ /ಪ. ವರ್ಗದವರಿಗೆ ಶೇ.45 ರಷ್ಟು ಅಂಕ ಪಡೆದು ತೇರ್ಗಡೆ ಹೊಂದಿದವರಿಗೆ (8 ರಿಂದ 10ನೇ ತರಗತಿವರೆಗೆ) ರೂ.3,000, ಪಿಯುಸಿ/ ಡಿಪ್ಲೊಮಾ/ ಐಟಿಐ/ ಟಿಸಿಹೆಚ್ ಶಿಕ್ಷಣಕ್ಕಾಗಿ ರೂ.4,000/-, ಪದವಿ ಶಿಕ್ಷಣಕ್ಕಾಗಿ ರೂ.5,000, ಸ್ನಾತಕೋತ್ತರ ಶಿಕ್ಷಣಕ್ಕಾಗಿ ರೂ.6,000/- ಇಂಜಿನೀಯರಿಂಗ್/ ವೈದ್ಯಕೀಯ ಶಿಕ್ಷಣಕ್ಕಾಗಿ ರೂ.10,000/-ಗಳ ಪ್ರೋತ್ಸಾಹ ಧನ ನೀಡಲಾಗುವುದು. |

| | | |
|---|---|---|
| ಈ) | ಕಳೆದ ಸಾಲಿನಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ, ಎಷ್ಟು ಮೊತ್ತವನ್ನು ನೀಡಲಾಗಿದೆ? | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ** ಕಳೆದ ಸಾಲಿನಲ್ಲಿ 191 ವಿದ್ಯಾರ್ಥಿಗಳಿಗೆ ತಲಾ ರೂ. 10,000/-ಗಳಂತೆ 19,10,000/-ಗಳ ವಿದ್ಯಾರ್ಥಿ ವೇತನವನ್ನು ನೀಡಲಾಗಿದೆ.<br><br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ** 2020-21ನೇ ಸಾಲಿನಲ್ಲಿ 1,15,538 ವಿಧ್ಯಾರ್ಥಿಗಳಿಗೆ ಒಟ್ಟು ರೂ. 86,93,66,430/- ಗಳನ್ನು ನೀಡಲಾಗಿದೆ.<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ವತಿಯಿಂದ** 2020-21ನೇ ಸಾಲಿಗೆ 13,729 ವಿದ್ಯಾರ್ಥಿಗಳಿಗೆ ರೂ. 6,01,48,000/- ಗಳ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಸೌಲಭ್ಯ ನೀಡಲಾಗಿರುತ್ತದೆ. |

**ಕಾಇ 425 ಎಲ್ಇಟಿ 2021**

(ಅರಬೈಲ್ ಶಿವರಾಮ ಹೆಬ್ಬಾರ್)
**ಕಾರ್ಮಿಕ ಸಚಿವರು**

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 1392ಕ್ಕೆ ಅನುಬಂಧ-1

ಕೋವಿಡ್-19ರ ಮೊದಲನೇ ಅಲೆಯಲ್ಲಿ ಘೋಷಿಸಲಾದ ವಿಶೇಷ ಪ್ಯಾಕೇಜ್ ಅಡಿ ರೂ. 5,000/-ಗಳ ನೆರವು ಕೋರಿ ಅರ್ಜಿ ಸಲ್ಲಿಸಿದ ಕಾರ್ಮಿಕರ ಹಾಗೂ ಪರಿಹಾರ ಪಡೆದ ಫಲಾನುಭವಿಗಳ ವಿವರ

| ಕ್ರ.ಸಂ. | ಜಿಲ್ಲೆಯ ಹೆಸರು | ಕಾರ್ಮಿಕರ ಸಂಖ್ಯೆ | ಪರಿಹಾರ ಪಡೆದ ಫಲಾನುಭವಿಗಳ ಸಂಖ್ಯೆ |
|---|---|---|---|
| 1 | ಬಾಗಲಕೋಟೆ | 3489 | 2897 |
| 2 | ಬಳ್ಳಾರಿ | 10570 | 8986 |
| 3 | ಬೆಂಗಳೂರು ನಗರ | 12078 | 10206 |
| 4 | ಬೆಂಗಳೂರು ಗ್ರಾಮಾಂತರ | 2490 | 2225 |
| 5 | ಬೆಳಗಾವಿ | 8455 | 7039 |
| 6 | ಬೀದರ್ | 3881 | 2751 |
| 7 | ಚಾಮರಾಜನಗರ | 4007 | 3510 |
| 8 | ಚಿಕ್ಕಬಳ್ಳಾಪುರ | 5273 | 4394 |
| 9 | ಚಿಕ್ಕಮಗಳೂರು | 1492 | 1294 |
| 10 | ಚಿತ್ರದುರ್ಗ | 5445 | 4615 |
| 11 | ದಕ್ಷಿಣಕನ್ನಡ | 1337 | 1179 |
| 12 | ದಾವಣಗೆರೆ | 4221 | 3638 |
| 13 | ಧಾರವಾಡ | 4448 | 3814 |
| 14 | ಗದಗ | 3239 | 2718 |
| 15 | ಗುಲ್ಬರ್ಗಾ | 6011 | 4978 |
| 16 | ಹಾಸನ | 3702 | 3231 |
| 17 | ಹಾವೇರಿ | 4581 | 3764 |
| 18 | ಕೋಲಾರ | 4958 | 4056 |
| 19 | ಕೊಪ್ಪಳ | 4745 | 3954 |
| 20 | ಮಂಡ್ಯ | 6400 | 5665 |
| 21 | ಮೈಸೂರು | 8441 | 7400 |
| 22 | ರಾಮನಗರ | 2418 | 2065 |
| 23 | ರಾಯಚೂರು | 8349 | 7079 |
| 24 | ಶಿವಮೊಗ್ಗ | 2453 | 2053 |
| 25 | ತುಮಕೂರು | 7178 | 6215 |
| 26 | ಉಡುಪಿ | 1416 | 1211 |
| 27 | ಉತ್ತರಕನ್ನಡ | 1671 | 1450 |
| 28 | ಕೊಡಗು | 633 | 557 |
| 29 | ವಿಜಯಪುರ | 4676 | 3756 |
| 30 | ಯಾದಗಿರಿ | 3545 | 2942 |
| ಒಟ್ಟು | | **1,41,602** | **1,19,642** |

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 1392ಕ್ಕೆ ಅನುಬಂಧ-2

ಕೋವಿಡ್-19ರ ಎರಡನೇ ಅಲೆಯಲ್ಲಿ ಘೋಷಿಸಲಾದ ವಿಶೇಷ ಪ್ಯಾಕೇಜ್ ಅಡಿ ರೂ. 2,000/-ಗಳ ನೆರವು ಕೋರಿ ಅರ್ಜಿ ಸಲ್ಲಿಸಿದ ಕಾರ್ಮಿಕರ ಹಾಗೂ ಪರಿಹಾರ ಪಡೆದ ಫಲಾನುಭವಿಗಳ ವಿವರ

| ಕ್ರಸಂ. | ಜಿಲ್ಲೆಯ ಹೆಸರು | ಕಾರ್ಮಿಕರ ಸಂಖ್ಯೆ | ಪರಿಹಾರ ಪಡೆದ ಫಲಾನುಭವಿಗಳ ಸಂಖ್ಯೆ |
|---|---|---|---|
| 1 | ಬಾಗಲಕೋಟೆ | 38124 | 6021 |
| 2 | ಬಳ್ಳಾರಿ | 73260 | 12632 |
| 3 | ಬೆಂಗಳೂರು ನಗರ | 147631 | 21760 |
| 4 | ಬೆಂಗಳೂರು ಗ್ರಾಮಾಂತರ | 17525 | 2620 |
| 5 | ಬೆಳಗಾವಿ | 151032 | 13781 |
| 6 | ಬೀದರ್ | 56827 | 3791 |
| 7 | ಚಾಮರಾಜನಗರ | 30439 | 5414 |
| 8 | ಚಿಕ್ಕಬಳ್ಳಾಪುರ | 32634 | 5466 |
| 9 | ಚಿಕ್ಕಮಗಳೂರು | 20418 | 3157 |
| 10 | ಚಿತ್ರದುರ್ಗ | 37392 | 7703 |
| 11 | ದಕ್ಷಿಣಕನ್ನಡ | 31663 | 5634 |
| 12 | ದಾವಣಗೆರೆ | 38446 | 7853 |
| 13 | ಧಾರವಾಡ | 58486 | 5398 |
| 14 | ಗದಗ | 30634 | 4485 |
| 15 | ಗುಲ್ಬರ್ಗಾ | 123276 | 6150 |
| 16 | ಹಾಸನ | 18587 | 5432 |
| 17 | ಹಾವೇರಿ | 44151 | 5157 |
| 18 | ಕೋಲಾರ | 38967 | 4878 |
| 19 | ಕೊಪ್ಪಳ | 46550 | 6372 |
| 20 | ಮಂಡ್ಯ | 45058 | 9153 |
| 21 | ಮೈಸೂರು | 102344 | 12724 |
| 22 | ರಾಮನಗರ | 17213 | 3010 |
| 23 | ರಾಯಚೂರು | 48597 | 9838 |
| 24 | ಶಿವಮೊಗ್ಗ | 30324 | 5108 |
| 25 | ತುಮಕೂರು | 54899 | 10697 |
| 26 | ಉಡುಪಿ | 12313 | 3532 |
| 27 | ಉತ್ತರಕನ್ನಡ | 40202 | 16165 |
| 28 | ಕೊಡಗು | 3792 | 2544 |
| 29 | ವಿಜಯಪುರ | 34103 | 4621 |
| 30 | ಯಾದಗಿರಿ | 28056 | 3905 |
| | ಒಟ್ಟು | 14,52,943 | 2,14,731 |

*ಉಳಿದ ಕಾರ್ಮಿಕರಿಗೆ ನೆರವಿನ ಮೊತ್ತವನ್ನು ಪಾವತಿಸಲು ಅಗತ್ಯ ಕ್ರಮ ವಹಿಸಲಾಗಿದೆ.

**ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 1392ಕ್ಕೆ ಅನುಬಂಧ-3**

**ಶೈಕ್ಷಣಿಕ ಸಹಾಯಧನ ವಿವರ**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ(ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | **ಪದವಿ ಪೂರ್ವ** | |
| 5 | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ 2 ವರ್ಷಅವಧಿಗೆ ಒಳಪಟ್ಟು |
| **ತಾಂತ್ರೀಕ/ ವೈಧ್ಯಕೀಯಎನ್‌ಇಇಟಿಅಥವಾ ಕೆಸಿಇಟಿ** | | |
| 12 | ಬಿಇ / ಬಿ.ಟೆಕ್‌ಅಥವಾ ಸಂಬಂಧಪಟ್ಟಯೂಜಿಕೋರ್ಸ್ | ಸದರಿ ಕೋರ್ಸ್‌ನಗರಿಷ್ಠ 2 ವರ್ಷಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರಕೋರ್ಸ್.) | ಸದರಿ ಕೋರ್ಸ್‌ನಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್‌ಎಮ್‌ಎಸ್‌ಕೋರ್ಸ್‌ಗೆಅಥವಾಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರಕೋರ್ಸ್ | ರೂ.60,000 (ಸದರಿ ಕೋರ್ಸ್‌ನಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್‌ನಗರಿಷ್ಠ ಅವಧಿಗೆ ಒಳಪಟ್ಟು) |

| | | |
|---|---|---|
| 15 | ಪಿಹೆಚ್‌ಡಿ/ ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆ ಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್ ರಿಸರ್ಚ್ ಫೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್‌ಐಟಿ/ ಐಐಎಸ್‌ಇಆರ್/ ಎಐಐಎಮ್‌ಎಸ್ /ಎನ್‌ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋಧನಾ ಶುಲ್ಕ |